# ಶಿವ

## ಒಂದು ಚಿಂತನೆ



ಸ್ವಾಮಿ ಹರ್ಷಾನಂದ

# ಶಿವ

## ಒಂದು ಚಿಂತನೆ

ಸ್ವಾಮಿ ಹರ್ಷಾನಂದ

ಪ್ರಕಾಶಕರು
ಶ್ರೀ ನಿತ್ಯಾನಂದ ಪ್ರಿಂಟರ್ಸ್
ಬೆಂಗಳೂರು 560 050

ಪ್ರಕಾಶಕರು
ಶ್ರೀ ನಿತ್ಯಾನಂದ ಪ್ರಿಂಟರ್ಸ್
ಬೆಂಗಳೂರು 560 050
ದೂರವಾಣಿ : 652 60 27

ಮೊದಲ ಮುದ್ರಣ : ಜೂನ್ 1998; ಪ್ರತಿಗಳು 5000
ಎರಡನೆ ಮುದ್ರಣ : ಜುಲೈ 2002; ಪ್ರತಿಗಳು 5000

**ಬೆಲೆ : ರೂ. 5/-**

ಮುದ್ರಕರು
ಬಿ. ಎನ್. ನಟರಾಜ್
ಶ್ರೀ ನಿತ್ಯಾನಂದ ಪ್ರಿಂಟರ್ಸ್
46, 4ನೇ ಅಡ್ಡರಸ್ತೆ, ಅಶೋಕನಗರ
ಬೆಂಗಳೂರು 560 050 © 652 60 27

# ಬಿನ್ನಹ

ಹಲವು ದೇವದೇವಿಯರನ್ನು ಪೂಜಿಸುವ ಹಿಂದೂ ಧರ್ಮವು ಅಹಿಂದೂಗಳ–ಏಕೆ, ಹಿಂದೂಗಳ–ದೃಷ್ಟಿಯಲ್ಲಿ ಕೂಡ, ಒಂದು ಒಗಟು! ಅದನ್ನು ಬಿಡಿಸಲು ಮಾಡಿದ ಪ್ರಯತ್ನವು *Hindu Gods and Goddesses* ಎಂಬ ಆಂಗ್ಲ ಗ್ರಂಥದ ರಚನೆಯಲ್ಲಿ ಕೊನೆಗೊಂಡಿತು.

ಈ ಗ್ರಂಥದಿಂದ ಆರಿಸಿದ ಕೆಲವು ಭಾಗಗಳನ್ನು ಮೂರು ಪುಸ್ತಿಕೆಗಳನ್ನಾಗಿ ಪ್ರಕಟಿಸಲಾಗಿತ್ತು. *Śiva and Gaṇapati* ಎಂಬುದು ಅದರಲ್ಲೊಂದು. ಇದರಲ್ಲಿ ಗಣಪತಿಯನ್ನು ಕುರಿತ ಭಾಗವು ಈಗಾಗಲೇ ಕನ್ನಡಕ್ಕೆ ಭಾಷಾಂತರಿಸಲ್ಪಟ್ಟು ಪ್ರಕಟಿತವಾಗಿದೆ. ಈಗ ಶಿವನನ್ನು ಕುರಿತ ಭಾಗವೂ ಕನ್ನಡಕ್ಕೆ ಅನುವಾದಿಸಲ್ಪಟ್ಟು ಪ್ರಕಟಿಸಲ್ಪಡುತ್ತಿದೆ. ನಮ್ಮ ಕೋರಿಕೆಯಂತೆ ಕನ್ನಡಾನುವಾದವನ್ನು ಸೊಗಸಾಗಿ ಮಾಡಿಕೊಟ್ಟಿರುವ ಶ್ರೀ **ವಿ. ರಘು** ಅವರಿಗೂ ಅಂದವಾಗಿ ಮುದ್ರಿಸಿ ಪ್ರಕಟಿಸಿರುವ ಶ್ರೀ **ಬಿ. ಎನ್. ನಟರಾಜ್** ಅವರಿಗೂ ನಾವು ಆಭಾರಿ.

ಕನ್ನಡ ಭಕ್ತರು ಮತ್ತು ಆಸ್ತಿಕಮಹಾಜನರು ಈ ಕಿರುಹೊತ್ತಗೆಯನ್ನು ಸ್ವಾಗತಿಸುವರೆಂದು ಹಾರಯಿಸುತ್ತೇವೆ.

**—ಸ್ವಾಮಿ ಹರ್ಷಾನಂದ**

# ಮುನ್ನುಡಿ

ಸಾಧಕರ ಭಾವಕ್ಕನುಗುಣವಾಗಿ, ಅನೇಕ ಸಾಧನಾಮಾರ್ಗಗಳಿವೆ ಎಂದು ಶ್ರೀರಾಮಕೃಷ್ಣರು ಹೇಳಿದ್ದಾರೆ. ಇದನ್ನೇ ಇನ್ನೂ ಮುಂದುವರಿಸಿ ವಿವಿಧ ಭಕ್ತರಿರುವಂತಹ ವಿವಿಧ ದೇವತೆಗಳೂ ಇದ್ದಾರೆಂದು ಹೇಳಬಹುದು. ಒಂದು ಪ್ರಧಾನ ದೇವರನ್ನು ಈ ಎಲ್ಲ ಆರಾಧನೆಗಳ ಕೇಂದ್ರವೆಂದು ಭಾವಿಸಿದಾಗ ಬಹುದೇವತಾರಾಧನೆ, ಸರ್ವದೇವತಾರಾಧನೆ, ಏಕದೇವತಾರಾಧನೆ ಅಥವಾ ಯಾವುದೇ 'ಆರಾಧನೆ' ಸ್ವೀಕಾರ್ಯವಾಗುತ್ತದೆ. ಹಿಂದೂಗಳಲ್ಲಿರುವ ಅಸಂಖ್ಯಾತ ದೇವತೆಗಳನ್ನು ಈ ದೃಷ್ಟಿಕೋನದಿಂದಲೇ ನೋಡಬೇಕು.

ಭಕ್ತಿಪುರಸ್ಸರವಾಗಿಯಲ್ಲವಾದರೂ ಪಕ್ಷಪಾತರಹಿತ ದೃಷ್ಟಿಯಿಂದ ಹಿಂದೂ ದೇವ-ದೇವಿಯರನ್ನು ನೋಡಿದಾಗ ಯಾರಿಗಾದರೂ ಅವುಗಳ ಸಂಕೇತಾರ್ಥದ ಶ್ರೀಮಂತಿಕೆ ಗೋಚರಿಸುವುದು. ಅರ್ಥಸಹಿತವಾಗಿ ಅವುಗಳನ್ನು ಕುರಿತು ಧ್ಯಾನಿಸಿದಾಗ ನಮ್ಮನ್ನು ಆಧ್ಯಾತ್ಮಿಕ ಅನುಭವದ ಎತ್ತರಕ್ಕೆ ಅವು ಕೊಂಡೊಯ್ಯಬಲ್ಲವು.

ಈ ಪುಟ್ಟ ಪುಸ್ತಕದಲ್ಲಿ ಶಿವನನ್ನು ಕುರಿತ ಸಂಕೇತಾರ್ಥಗಳ ವಿವರಣೆ ನೀಡುವ ನಮ್ರಪ್ರಯತ್ನ ಮಾಡಲಾಗಿದೆ. ಓದುಗರಿಗೆ ಈ

ದೇವನ ಬಗ್ಗೆ ಮೂಲ ವಿಚಾರಗಳು ತಿಳಿದು ಅವರು ಮತ್ತೂ ಹೆಚ್ಚಿನ ವಿಚಾರವನ್ನು, ಇತರ ದೇವತೆಗಳ ವಿವರವನ್ನು, ಅರಿಯಬೇಕೆಂಬ ಕುತೂಹಲವುಂಟಾದರೆ ನಮ್ಮ ಪ್ರಯತ್ನವು ಸಾರ್ಥಕವಾದಂತೆ.

ಹಿಂದೂಗಳ ಸಕಲದೇವತೆಗಳ ವಿವರಗಳನ್ನು ತಿಳಿಯ ಬಯಸುವವರು ಮದರಾಸಿನ ಶ್ರೀರಾಮಕೃಷ್ಣ ಮಠದಿಂದ ಪ್ರಕಟ ಗೊಂಡಿರುವ ನನ್ನದೇ ಆಂಗ್ಲ ಕೃತಿಯಾದ 'ಹಿಂದೂ ದೇವ ದೇವಿಯರು' (*Hindu Gods and Goddesses*) ಪುಸ್ತಕವನ್ನು ನೋಡಬಹುದು.

—ಸ್ವಾಮಿ ಹರ್ಷಾನಂದ

# ಶಿವ

## ಒಂದು ಚಿಂತನೆ

ಹಿಂದೂಗಳ ತ್ರಿಮೂರ್ತಿಯಲ್ಲಿ ಕಡೆಯವನೇ ಶಿವ. ಪ್ರಪಂಚದ ಲಯಕ್ಕೆ ಕರ್ತನು ಈತ. ತಮೋಗುಣದ ಪ್ರತೀಕವೂ, ಲಯಸುಳಿಯ ಕೇಂದ್ರವೂ (centrifugal inertia) ವಿಕಿರಣದ ಮತ್ತು ನಿಶ್ಶೇಷ ಲಯದ ಪ್ರತೀಕವೂ ಶಿವ.

ಪ್ರಳಯದ ನಂತರ, ಪುನಃ ಸೃಷ್ಟಿರಚನೆಗೆ ಮುನ್ನ, ಯಾರಲ್ಲಿ ವಿಶ್ವವು 'ನಿದ್ರೆ' ಮಾಡುತ್ತದೊ (**ಶೇತೇ ಅಸ್ಮಿನ್ನಿತಿ ಶಿವಃ**) ಆತನೇ 'ಶಿವ' ಎಂಬುದು ವಾಚ್ಯಾರ್ಥ.

ಜನಿಸಿದ್ದೆಲ್ಲವೂ ಮರಣಹೊಂದಲೇಬೇಕು. ಉತ್ಪತ್ತಿಯಾದುದೆಲ್ಲವೂ ವಿಘಟಿತವಾಗಬೇಕು, ನಾಶವಾಗಬೇಕು. ಇದು ಅಲಂಘ್ಯವಾದ ನಿಯಮ. ಈ ವಿಘಟನೆಯುಂಟುಮಾಡುವ ತತ್ತ್ವವೇ, ಈ ನಾಶದ ಹಿಂದಿರುವ ಶಕ್ತಿಯೇ ಶಿವ.

ಶಿವ ಎನ್ನುವುದು ಇಷ್ಟಕ್ಕೇ ಸೀಮಿತವಲ್ಲ. ಅಂತ್ಯವಿಲ್ಲದ ಶೂನ್ಯದೊಳಗೆ ವಿಲೀನಗೊಳ್ಳುವುದೇ ಜಗತ್ತಿನ ಲಯ. ಈ ಮಹಾ ಶೂನ್ಯವೇ, ಯಾವುದರಿಂದ ಮತ್ತೆ ಮತ್ತೆ ಅನಂತವಾದ ಪ್ರಪಂಚವು ಸೃಷ್ಟಿಯಾಗುವುದೋ ಅದೇ ಶಿವ. ಆದುದರಿಂದ ಶಿವನನ್ನು ಪ್ರಳಯ

ಕಾರಣನೆಂದು ಕರೆದರೂ ಸಹ, ಸೃಷ್ಟಿ ಮತ್ತು ಸ್ಥಿತಿಪಾಲನೆಯಲ್ಲೂ ಅವನದು ಸಮಾನ ಪಾತ್ರವೇ. ಈ ದೃಷ್ಟಿಯಿಂದ ಬ್ರಹ್ಮಮತ್ತು ವಿಷ್ಣು ಕೂಡ ಶಿವನೇ ಆಗಿದ್ದಾರೆ. ಪುರಾಣದ ಅನೇಕ ಕತೆಗಳು ಬಹುಶಃ ಈ ತತ್ತ್ವವನ್ನೇ ಪ್ರತಿಪಾದಿಸುತ್ತವೆ. ಒಂದು ಪ್ರಸಂಗದಲ್ಲಿ ಶಿವನು ಅನಂತ ಅಗ್ನಿಯ ಗರ್ಭದಿಂದ, ಬ್ರಹ್ಮನನ್ನು ಮತ್ತು ವಿಷ್ಣುವನ್ನು ಕುರಿತು, ಅವರು ತನ್ನದೇ ಅಂಶವೆಂದು ಹೇಳುವುದಾಗಿ ತಿಳಿಸಿದರೆ, ಮತ್ತೆ ಕೆಲವು ಕತೆಗಳಲ್ಲಿ ಕೋಪಗೊಂಡು ಹುಬ್ಬುಗಂಟಿಕ್ಕಿದ ವಿಷ್ಣುವಿನ ಹುಬ್ಬಿನಿಂದ ಶಿವನು ಜನಿಸಿದನೆಂದೋ ಅಥವಾ ಪುತ್ರಾಕಾಂಕ್ಷಿಯಾದ ಬ್ರಹ್ಮನಿಂದ ಜನಿಸಿದನೆಂದೋ ಹೇಳಲಾಗಿದೆ.

ಶಿವನನ್ನು–ಆತನು ಭಯಂಕರ ಸ್ವರೂಪಿಯಾಗಿದ್ದಾಗ–ರುದ್ರ ನೆಂದು ಕರೆಯುತ್ತಾರೆ. ಇವರಿಬ್ಬರೂ ಒಂದೇಯೇ ಅಥವಾ ಬೇರೆ ಬೇರೆಯೇ ಎಂಬ ವಿಚಾರದಲ್ಲಿ ಚರ್ಚೆಗಳು, ಭಿನ್ನಾಭಿಪ್ರಾಯಗಳು ಇದ್ದು ಇದೊಂದು ವಿವಾದದ ವಿಷಯವೇ ಆಗಿದೆ. ವೇದಗಳಲ್ಲಿ ಬರುವ ರುದ್ರನು, ಪುರಾಣ-ಆಗಮಗಳಲ್ಲಿ ಬರುವ ಶಿವನು, ಎರಡು ಬೇರೆ ಬೇರೆ ದೇವತೆಗಳಾಗಿದ್ದು ಮುಂದೆ ಎರಡು ಜನಾಂಗಗಳ ಸಾಂಸ್ಕೃತಿಕ ಸಂಯೋಜನೆಯಿಂದಾಗಿ ಒಂದೇ ದೇವತೆಯಾಗಿ ಪರಿಗಣಿತವಾಯಿತೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ವಿದ್ವಾಂಸರ ಪ್ರಕಾರ ಶಾಂತಸ್ವಭಾವದ ದೇವತೆಯಾದ ಶಿವನು ಆರ್ಯರಲ್ಲದವರ ದೇವತೆಯಾಗಿದ್ದು ವೇದಕಾಲದ 'ರುದ್ರ'ನಿಗಿಂತ

ಪ್ರಾಚೀನನು. 'ಆರ್ಯ ಆಕ್ರಮಣಕಾರರು' ಶೈವರನ್ನು, ಶಿವನನ್ನು ಕಡೆಗಣಿಸಿ ಉಪೇಕ್ಷಿಸಿದರಾದರೂ (ಇದಕ್ಕೆ ಕಾರಣ ಅವರ ಗೂಢವಾದ ಸಂಸ್ಕಾರ ಮತ್ತು ಆಚರಣೆಗಳು) ಎರಡೂ ಜನಾಂಗಗಳು ಒಟ್ಟಿಗೇ ಬಾಳಬೇಕಾಗಿದ್ದದ್ದರಿಂದ ಮರುಮೈತ್ರಿಯೂ ಸಾಂಸ್ಕೃತಿಕ ಸಮನ್ವಯವೂ ಅನಿವಾರ್ಯವಾಯಿತು.

ಮೇಲಿನ ಹೇಳಿಕೆಯ ಸತ್ಯಾಸತ್ಯತೆಗಳು ಏನೇ ಆಗಿದ್ದರೂ ಈ ಅಧ್ಯಯನಕ್ಕೆ ಅವು ಅಪ್ರಸ್ತುತವಾದ್ದರಿಂದ ನಾವು ಈ ಸಂಬಂಧಿತ ಸಂಕೇತಾರ್ಥಗಳ ವಿಶ್ಲೇಷಣೆಗೆ ಹೆಚ್ಚು ಗಮನವಿತ್ತು ನಮ್ಮ ಬುದ್ಧಿ-ಭಾವಗಳ ಶ್ರೀಮಂತಿಕೆಯನ್ನು ಬೆಳೆಸಿಕೊಳ್ಳೋಣ.

ಶಿವನನ್ನು ಮಾನವರೂಪದಲ್ಲಿಯೂ ಮತ್ತು ಲಿಂಗರೂಪದಲ್ಲಿಯೂ ಪೂಜಿಸಬಹುದು. ಆದರೆ ಲಿಂಗರೂಪದ ಅರ್ಚನೆ ನಿಯಮವೇ ಆಗಿದೆ. ಮಾನವರೂಪೀ ಶಿವನ ಅರ್ಚನೆ ಅಪರೂಪ. ನಾವು ಸಾಮಾನ್ಯವಾಗಿ ಕಾಣುವ ಶಿವನ ಚಿತ್ರಗಳಲ್ಲಿ ಅವನನ್ನು ಕರ್ಪೂರದಷ್ಟು ಬೆಳ್ಳಗಿನ ಸುಂದರ ಯುವಕನನ್ನಾಗಿ ತೋರಿಸಲಾಗಿದೆ. ಅಂಗಾಂಗಗಳು ದೃಢವಾಗಿದ್ದು ಭಸ್ಮದಿಂದ ಆಚ್ಛಾದಿತವಾಗಿವೆ. ಶಿವನಿಗೆ ಮೂರು ಕಣ್ಣುಗಳು—ಮೂರನೆ ಕಣ್ಣು ಹಣೆಯಲ್ಲಿ, ಭ್ರೂಮಧ್ಯದಲ್ಲಿ ಇರುವುದು. ನಾಲ್ಕು ಕೈಗಳಿದ್ದು , ಎರಡರಲ್ಲಿ ತ್ರಿಶೂಲ ಮತ್ತು ಡಮರುವನ್ನು ಹಿಡಿದಿರುತ್ತಾನೆ. ಇನ್ನೆರಡರಲ್ಲಿ ಅಭಯ ಮತ್ತು ವರದ ಮುದ್ರೆಗಳಿರುತ್ತವೆ. ಕಿರೀಟದೋಪಾದಿಯ

ಜಟೆಯು ಶಿವನ ತಲೆಯಮೇಲಿದೆ, ಅಲ್ಲಿಂದಲೇ ಗಂಗೆಯು ಹರಿಯುತ್ತಿದ್ದಾಳೆ. ಬಾಲಚಂದ್ರನನ್ನು ಇವನು ಮುಡಿಯಲ್ಲಿ ಧರಿಸಿರುತ್ತಾನೆ. ಹುಲಿ ಮತ್ತು ಆನೆಯ ಚರ್ಮಗಳ ಉಡುಗೆಯನ್ನು ಹೊಂದಿರುತ್ತಾನೆ. ಸರ್ಪಗಳನ್ನು ಕಂಠೀಹಾರವನ್ನಾಗಿಯೂ, ಸೊಂಟಪಟ್ಟಿಯಾಗಿಯೂ, ಕಡಗತೋಳ್ಬಂದಿಗಳನ್ನಾಗಿಯೂ, ಉಪವೀತವನ್ನಾಗಿಯೂ ಶಿವನು ಧರಿಸಿರುತ್ತಾನೆ. ತನ್ನ ನೀಲಕಂಠದ ಸುತ್ತ ತಲೆಬುರುಡೆಗಳ ಮಾಲೆಯನ್ನು ಹಾಕಿಕೊಂಡಿರುತ್ತಾನೆ.

ತನ್ನತನವನ್ನೇ ದೇವರಲ್ಲಿಯೂ ಆರೋಪಿಸುವ ಸ್ವಭಾವ ಮಾನವನದು! ಹೀಗಾಗಿ ಅವನು ಶಿವನನ್ನೂ ಸಂಸಾರಿಯಾಗಿ ಚಿತ್ರಿಸುತ್ತಾನೆ. ಪಾರ್ವತಿ ಶಿವನ ಪತ್ನಿ. ಗಣೇಶ ಮತ್ತು ಕುಮಾರ (ಸ್ಕಂದ ಅಥವಾ ಸುಬ್ರಹ್ಮಣ್ಯ) ಶಿವನ ಮಕ್ಕಳು.

ಶಿವನ ಪರಿವಾರವಾದರೋ ಸಾಕ್ಷಾತ್ತಾಗಿ ಒಂದು ಮೃಗಾಲಯವೇ ಆಗಿದೆ. ನಂದಿ ಎಂಬ ವೃಷಭ ಶಿವನ ವಾಹನ. ಭೃಂಗಿ ಋಷಿ (ಮೂರು ಕಾಲು ಮೂರು ಕೈಯುಳ್ಳವನು), ಗಣೇಶನ ಇಲಿ, ಕುಮಾರನ ನವಿಲು, ಜೊತೆಗೆ ಇವನ ಸುತ್ತ ಸದಾ ಕುಪ್ಪಳಿಸುವ ಭೂತ-ಪ್ರೇತ-ಪಿಶಾಚ ಗಣಗಳು! ಇವೆಲ್ಲವೂ ಶಿವನ ಪರಿವಾರ!

ಶಿವನ ನಿವಾಸಸ್ಥಾನ ಹಿಮಾವೃತವಾದ ಹಿಮಾಲಯವಾದರೂ ಅವನು ಭೂಮಿಯಲ್ಲಿ ವಿಹರಿಸುವ ಆಸಕ್ತಿಯುಳ್ಳವನು. ಆದರಲ್ಲೂ ವಿಶೇಷವಾಗಿ ಸ್ಮಶಾನಗಳಲ್ಲಿ, ರುದ್ರಭೂಮಿಗಳಲ್ಲಿ

ಸಂಚರಿಸುವವನು. ವಿನಾಶಕಾರಕ, ಲಯಸ್ವರೂಪದ, ಕಾರ್ಯಗಳಿಗೆ ಅಧಿಪತಿಯಾದ ಶಿವನ ಸ್ವಭಾವಕ್ಕೆ ಸರಿಯಾಗಿದೆ ಅವನ ಈ ಮೇಲಿನ ಗುಣ.

ಸಂಕೇತಮಯವಾದ ಶಿವನ ಗುಣ-ಸ್ವಭಾವಗಳ ವಿವರಣೆಯನ್ನು ನೀಡುವ ಮುನ್ನ ಅವನನ್ನು ಕುರಿತು ಪುರಾಣ ಸಾಹಿತ್ಯದಲ್ಲಿ ಇರುವ ವಿವಿಧ ಕತೆಗಳ ಸಾರಾಂಶವನ್ನು ಅರಿಯುವುದು ಸೂಕ್ತ:

೧. ಲೀಲಾವಿನೋದಭಾವದಲ್ಲಿ ಪಾರ್ವತಿಯು ಒಮ್ಮೆ ಶಿವನ ಕಣ್ಣುಗಳನ್ನು ಮುಚ್ಚಿದಳಂತೆ. ತಕ್ಷಣ ಇಡೀ ಜಗತ್ತು ಅಂಧಕಾರದಲ್ಲಿ ಮುಳುಗಿಹೋಯಿತು! ಪ್ರಪಂಚದ ಈ ಸಂಕಟವನ್ನು ಪರಿಹರಿಸಲು ಶಿವನು ಭ್ರೂಮಧ್ಯದಲ್ಲಿ ಮೂರನೇ ಕಣ್ಣು ತೆರೆಯಲು ಸಂಕಲ್ಪಿಸಿದನಂತೆ. ಇದರಿಂದ ಬೆಳಕು, ಅಗ್ನಿ ಮತ್ತು ಶಾಖಗಳನ್ನು ಜಗತ್ತಿಗೆ ನೀಡಿದನಂತೆ. ಮುಂದೊಮ್ಮೆ ಶಿವನು ತನ್ನ ಮೂರನೆ ಕಣ್ಣು ತೆರೆದದ್ದು (ಸಾಮಾನ್ಯವಾಗಿ ಲೋಕಾನುಕಂಪೆಯಿಂದ ಅದನ್ನು ಸದಾ ಮುಚ್ಚಿರುತ್ತಾನೆ) ಕಾಮಶಕ್ತಿಯ ಪ್ರತೀಕವಾದ ಕಾಮದೇವನನ್ನು ದಹಿಸಲು.

೨. ದೇವನದಿಯಾದ ಗಂಗೆ ಸ್ವರ್ಗದಿಂದ ಧರೆಗಿಳಿಯುವ ಸಂದರ್ಭದಲ್ಲಿ ಅತಿ ಗರ್ವದಿಂದ ಶಿವನ ತಲೆಯ ಮೇಲೆ ಧುಮ್ಮಿಕ್ಕಿದಾಗ ಗರ್ವಭಂಗಕ್ಕಾಗಿ ಅವಳನ್ನು ತನ್ನ ಜಟೆಯಲ್ಲಿ ಬಂಧಿಸಿಟ್ಟನಂತೆ. ಭಗೀರಥನ (ದೇವನದಿಯನ್ನು ಭೂಮಿಗೆ ತರುವಲ್ಲಿ ಇವನೇ ಮುಖ್ಯ ಕಾರಣ) ಅನೇಕ ಪ್ರಾರ್ಥನೆ ಮತ್ತು ಬೇಡಿಕೆಯ ಬಳಿಕ, ಗಂಗೆಯ

ಕ್ಷಮಾಪಣೆಯ ನಂತರ, ಶಿವನು ಅವಳನ್ನು ಹರಿಯಬಿಟ್ಟನಂತೆ.

೩. ಕ್ಷೀರಸಮುದ್ರಮಥನ ಕಾಲದಲ್ಲಿ ಹುಟ್ಟಿದ ವಸ್ತುಗಳಲ್ಲಿ ಬಾಲಚಂದ್ರನೂ ಒಂದು. ಶಿವನು ಇವನನ್ನು ಹಿಡಿದು ತನ್ನ ಜಟೆಯಲ್ಲಿ ಧರಿಸಿದನಂತೆ. ಹಾಲಾಹಲವು ಉದ್ಭವಿಸಿ ಪ್ರಪಂಚವನ್ನು ತನ್ನ ವಿಷಜ್ವಾಲೆಯಿಂದ ಬಾಧಿಸತೊಡಗಿದಾಗ ಶಿವನು ಅದನ್ನು ತನ್ನ ಅಂಗೈಯಲ್ಲಿ ಸಂಗ್ರಹಿಸಿ ಕುಡಿದು ಪ್ರಪಂಚಗಳನ್ನು ಕಾಪಾಡಿದ. ತನ್ನ ಪತಿಯ ಕ್ಷೇಮದ ಬಗ್ಗೆ ಕಾತರಗೊಂಡ ಪಾರ್ವತಿಯು ಶಿವನ ಗಂಟಲನ್ನು ಒತ್ತಿ ವಿಷವು ಹೊಟ್ಟೆಗಿಳಿಯದಂತೆ ತಡೆದು ಕಂಠದಲ್ಲಿಯೇ ನಿಲ್ಲಿಸಿದಳು. ಶಿವನ ಕಂಠವು ವಿಷದ ಪರಿಣಾಮವಾಗಿ ಸದಾ ನೀಲವಾಗಿ ಉಳಿಯುವಂತಾಯಿತು.

೪. ಶಿವನ ಅಪ್ರತಿಮ ಸೌಂದರ್ಯದಿಂದ ತಮ್ಮ ಪತ್ನಿಯರು ಆಕರ್ಷಿತರಾಗಿದ್ದುದನ್ನು ಕಂಡ ದಾರುಕವನದ ಋಷಿಗಳು ಅವನನ್ನು ಕೊಲ್ಲಲು ಮಂತ್ರ-ಮಾಟಗಳನ್ನು ಪ್ರಯೋಗಿಸಿದರು. ಅವರ ಯಜ್ಞಕುಂಡದಿಂದ ಒಂದು ಹುಲಿ, ಒಂದು ಜಿಂಕೆ ಮತ್ತು ಕಾದುಕೆಂಪಾದ ಕಬ್ಬಿಣ ಹುಟ್ಟಿಬಂದುವಂತೆ. ಶಿವನು ಹುಲಿಯನ್ನು ಕೊಂದು ಅದರ ಚರ್ಮವನ್ನು ಧರಿಸಿ, ಜಿಂಕೆಯನ್ನು ಎಡಗೈಯಲ್ಲಿ ಹಿಡಿದು (ಅಂದಿನಿಂದಲೂ ಅದು ಅವನ ಕಯ್ಯಲ್ಲಿ ಹಾಗೇ ಇದೆ) ಕಬ್ಬಿಣವನ್ನು ತನ್ನ ಒಂದು ಆಯುಧವನ್ನಾಗಿ ಮಾಡಿಕೊಂಡನಂತೆ.

೫. ಶಿವನನ್ನು ಕುರಿತ ಇತರ ಕತೆಗಳೆಂದರೆ: ಅವನು

ದಕ್ಷಯಜ್ಞವನ್ನು ನಾಶಮಾಡಿದುದು, ದಕ್ಷನ ಶಿರಚ್ಛೇದ ಮಾಡಿದ್ದು, ಬ್ರಹ್ಮನು ಗೌರವದಿಂದ ಮಾತನಾಡಲಿಲ್ಲವೆಂದು ಅವನ ಐದು ತಲೆಗಳಲ್ಲಿ ಒಂದನ್ನು ಚಿವುಟಿ ಹಾಕಿದ್ದು, ತ್ರಿಪುರಾಸುರನ ಮೂರು ನಗರಗಳನ್ನು ಧ್ವಂಸಗೊಳಿಸಿದ್ದು, ರಾಕ್ಷಸನಾದ ಗಜಾಸುರನನ್ನು ಕೊಂದು ಅವನ ಚರ್ಮವನ್ನು ಧರಿಸಿದ್ದು, ಅರ್ಜುನನಿಗೆ ಪಾಶುಪತಾಸ್ತ್ರವನ್ನು ವರವಾಗಿ ನೀಡಿದ್ದು, ಭಕ್ತಭೃಂಗಿಯ ಅಜ್ಞಾನವನ್ನು ತೊಲಗಿಸಲು ಅರ್ಧನಾರೀಶ್ವರನಾಗಿದ್ದು, ಬ್ರಹ್ಮ ಮತ್ತು ವಿಷ್ಣುವಿಗೆ ಪಾಠಕಲಿಸಲು ಅಗ್ನಿಯ ಕಂಬವಾಗಿ ಕಾಣಿಸಿಕೊಂಡಿದ್ದು, ತನ್ನ ಭಕ್ತ ಮಾರ್ಕಂಡೇಯನನ್ನು ಉಳಿಸಲು ಮೃತ್ಯುದೇವತೆಯಾದ ಯಮನನ್ನು ಧಿಕ್ಕರಿಸಿದ್ದು ....ಇತ್ಯಾದಿ.

ಈಗ ನಾವು ಶಿವನ ಚಿತ್ರಣದಲ್ಲಿ ಕಾಣುವ ವಿವರಗಳ ಸಂಕೇತಾರ್ಥಗಳನ್ನು ತಿಳಿಯುವ ಪ್ರಯತ್ನ ನಡೆಸಬಹುದು. ಶಿವನು ಹಿಮದಂತೆ ಬೆಳ್ಳಗಿರುವವನು—ಇದು ಅವನ ನಿವಾಸಸ್ಥಾನವಾದ ಶುಭ್ರಶ್ವೇತಗಿರಿಯಾದ ಹಿಮಾಲಯದೊಡನೆ ಚೆನ್ನಾಗಿ ಹೊಂದಿಕೊಳ್ಳುತ್ತದೆ. ಬಿಳುಪು ಬೆಳಕಿನ ಸಂಕೇತ; ಅಂದರೆ, ಅಜ್ಞಾನವನ್ನು ಅಳಿಸಿ ಅರಿವನ್ನು ಬೆಳಗುವ ಜ್ಞಾನದ ಸಂಕೇತ. ತಮಸ್ಸನ್ನು (ಅಂಧಕಾರವನ್ನು, ನಾಶವನ್ನು) ಪ್ರತಿನಿಧಿಸುವ ಶಿವನನ್ನು ಬೆಳ್ಳಗೆ ಚಿತ್ರಿಸುವುದು ಆಶ್ಚರ್ಯವೆನಿಸುತ್ತದೆ. ಹಾಗೆಯೇ ಸತ್ತ್ವವನ್ನು (ಬೆಳಕಿನ ಮತ್ತು ಜ್ಞಾನದ ಶಕ್ತಿಯನ್ನು) ಪ್ರತಿನಿಧಿಸುವ ವಿಷ್ಣುವನ್ನು

ಘನಶ್ಯಾಮನನ್ನಾಗಿ, ಕಡುನೀಲಿಯಾಗಿ ಚಿತ್ರಿಸುವುದೂ ವಿಚಿತ್ರವೇ. ಆದರೆ ನಿಜವಾಗಿ ಇದರಲ್ಲಿ ವಿಸ್ಮಯಪಡುವಂಥದ್ದೇನೂ ಇಲ್ಲ; ಏಕೆಂದರೆ ವಿರುದ್ಧ ಗುಣಗಳನ್ನು ಬೇರ್ಪಡಿಸುವುದು ಅಸಾಧ್ಯವೇ. ಶಿವನು ಬಾಹ್ಯದಲ್ಲಿ ಬೆಳ್ಳಗೂ ಆಂತರ್ಯದಲ್ಲಿ ಕಪ್ಪಗೂ ಇರುವವನು, ವಿಷ್ಣುವಾದರೋ ಇದಕ್ಕೆ ತದ್ವಿರುದ್ಧವಾಗಿರುವವನು.

ಶಿವನ ಮೂರುಕಣ್ಣುಗಳು ಸೂರ್ಯ, ಚಂದ್ರ ಮತ್ತು ಅಗ್ನಿ ಇವರ ಪ್ರತೀಕ. ಇವು ಬೆಳಕು, ಜೀವ ಮತ್ತು ಶಾಖದ ಮೂಲವೂ ಹೌದು. ಮೂರನೆಯ ಕಣ್ಣು ಜ್ಞಾನನೇತ್ರ; ವಿವೇಕದ ಸಂಕೇತವೂ ಆಗಬಹುದು. ಇದು ಅವನ ಸರ್ವವ್ಯಾಪಕ ಗುಣವನ್ನೂ ಸೂಚಿಸುತ್ತದೆ.

ಸೂರ್ಯ ಚಂದ್ರರು ಅವನ ಎರಡು ಕಣ್ಣುಗಳಾದರೆ ಪ್ರಚಂಡವಾಗಿ ಬೀಸುತ್ತಿರುವ ಗಾಳಿಸಹಿತವಾದ ಇಡೀ ಆಕಾಶವು ಅವನ ತಲೆಗೂದಲಾಗುತ್ತದೆ. ಆದ್ದರಿಂದಲೇ ಅವನನ್ನು 'ವ್ಯೋಮಕೇಶ' (ಆಕಾಶವನ್ನೇ ತಲೆಗೂದಲನ್ನಾಗುಳ್ಳವನು) ಎಂದು ಕರೆಯುವುದು.

ಹುಲಿಯು ಆಕ್ರಮಣಕಾರೀ ಪ್ರಾಣಿ. ತನ್ನ ಅಸಹಾಯಕ ಬಲಿಪಶುವನ್ನು ನಿರ್ದಾಕ್ಷಿಣ್ಯದಿಂದ ಬಗೆದುತಿನ್ನುವ ಕ್ರೂರಿ. ಎಂದೂ ತೃಪ್ತಗೊಳ್ಳದೆ ಮಾನವರನ್ನು ಸದಾ ಬಲಿತೆಗೆದುಕೊಳ್ಳುತ್ತಿರುವ 'ಆಸೆ'ಯನ್ನು ನಾವು ಹುಲಿಗೆ ಹೋಲಿಸಬಹುದು. ಹುಲಿಯನ್ನು ಕೊಂದು ಅದರ ಚರ್ಮವನ್ನು ಧರಿಸಿರುವ ಶಿವನು ಆಸೆಯನ್ನು

ಮೆಟ್ಟಿನಿಂತಿರುವುದರ ಸಂಕೇತ.

ಆನೆ ಬಲಿಷ್ಠ ಪ್ರಾಣಿ. ಶಿವನು ಅದರ ಚರ್ಮವನ್ನು ಧರಿಸಿ ಎಲ್ಲ ಬಗೆಯ ಪಶುಭಾವಗಳನ್ನು ಸಂಪೂರ್ಣವಾಗಿ ಜಯಿಸಿರುವ ಸ್ಥಿತಿಯನ್ನು ಪ್ರತಿಬಿಂಬಿಸುತ್ತಾನೆ.

ಶಿವನು ಧರಿಸಿರುವ ತಲೆಬುರುಡೆಗಳ ಹಾರ ಮತ್ತು ಚಿತಾಭಸ್ಮ ಧಾರಣೆ ಅವನು ವಿನಾಶದ ಪ್ರಭುವೆಂದು ತಿಳಿಸುತ್ತದೆ. ತಲೆಬುರುಡೆಗಳ ಮಾಲೆಯು ಕಾಲಪ್ರವಾಹದ ಆವರ್ತಗಳನ್ನು, ಮನುಕುಲದ ವಿನಾಶ ಮತ್ತು ಪುನಃಸೃಷ್ಟಿಯ ಚಕ್ರವನ್ನು, ಸೂಚಿಸುತ್ತದೆ.

ಶಿವನು ಯೋಗ ಮತ್ತು ಯೋಗಿಗಳ ಒಡೆಯನು. ಗಾಢಧ್ಯಾನದಲ್ಲಿರುವ, ತನ್ನ ಸ್ವಸ್ವರೂಪದರ್ಶನದಿಂದ ಆನಂದಗೊಂಡಿರುವ ರೀತಿಯಲ್ಲಿ ಶಿವನನ್ನು ಚಿತ್ರಿಸಿರುವುದನ್ನು ನಾವು ಅನೇಕ ಕಡೆಗಳಲ್ಲಿ ಕಾಣುತ್ತೇವೆ. ಗಂಗೆಯ ಧಾರೆ ಇದರ ಸಂಕೇತವೆನ್ನಬಹುದು. ಅಥವಾ ಅದು ಜ್ಞಾನವನ್ನು ಸೂಚಿಸುವುದು. ಗಂಗೆಯು ಪವಿತ್ರಕಾರೀ ಗುಣ ಹೊಂದಿರುವಳು ಎಂದು ಗೌರವಕ್ಕೆ ಪಾತ್ರಳಾಗಿರುವುದರಿಂದ ಅವಳನ್ನು ಧರಿಸಿರುವವನು ಪವಿತ್ರಸ್ವರೂಪಿಯೂ ಪವಿತ್ರತೆಯನ್ನುಂಟುಮಾಡುವ ಗುಣದ ಸಾಕಾರಮೂರ್ತಿಯೂ ಆಗಿರುವನು ಎಂಬುದನ್ನು ಬಿಡಿಸಿಹೇಳಬೇಕಿಲ್ಲವಷ್ಟೆ?

ಶಿವನ ಶಿರದಲ್ಲಿರುವ ಬಾಲಚಂದ್ರನು ಕಾಲದ ಪ್ರತೀಕ. ಚಂದ್ರನ ಏರಿಳಿತಗಳ (ಶುಕ್ಲ-ಕೃಷ್ಣ ಪಕ್ಷಗಳ) ಆಧಾರದಿಂದ ದಿನ

ಗಳನ್ನು ಮಾಸಗಳನ್ನು ಲೆಕ್ಕಹಾಕುವುದುಂಟು. ಚಂದ್ರನನ್ನು ಧರಿಸುವುದರ ಮೂಲಕ ಶಿವನು ಕಾಲವೂ ಕೂಡ ತನ್ನ ಒಂದು ಆಭರಣವೇ ಹೊರತು ತನಗೇನೂ ಅದು ಹೆಚ್ಚಿನದಲ್ಲ ಎಂದು ಧ್ವನಿಸುತ್ತಾನೆ.

ಸಾವಿನ ರೂಪವೇ ಆಗಿ ನಮ್ಮ ಕಣ್ಣಿಗೆ ಕಾಣುವ ವಿಷಸರ್ಪಗಳು ಅವನನ್ನು ವಿಧವಿಧವಾಗಿ ಅಲಂಕರಿಸಿವೆ. ಸಾವಿನ ಸ್ವರೂಪದಿಂದಲೇ ಅಲಂಕರಿಸಿಕೊಂಡವನು ಮಾತ್ರ ಹಾಲಾಹಲದಂತಹ ಘೋರವಿಷವನ್ನು ನುಂಗಿ ಜಗತ್ತನ್ನು ಕಾಪಾಡಬಲ್ಲ. ಇವೆಲ್ಲವೂ ಒಂದು ವಿಷಯದತ್ತ ನಮ್ಮ ಗಮನಸೆಳೆಯುವುದು, ಅದೆಂದರೆ: ಶಿವನು ಮೃತ್ಯುಂಜಯ–ಸಾವನ್ನು ಜಯಿಸಿದವನು! ಮಂಡಲಾಕಾರದ ಸರ್ಪಗಳು ಸ್ಥೂಲಜಗತ್ತಿನ ಕಾಲಚಕ್ರದ ಸ್ವರೂಪವನ್ನು ಜೊತೆಗೆ ಮೂಲಶಕ್ತಿಗೆ ಸಂವಾದಿಯಾದ ಜೀವಜಗತ್ತಿನಲ್ಲಿರುವ ಸೂಕ್ಷ್ಮವಾದ ಲೈಂಗಿಕ ಶಕ್ತಿಯನ್ನು ಪ್ರತಿನಿಧಿಸುತ್ತದೆ. ಇದರಿಂದ ಶಿವನೇ ಕಾಲದ ಮತ್ತು ಶಕ್ತಿಯ ಒಡೆಯನೆಂದು ಸೂಚಿತವಾಗಿದೆ.

ಶಿವನ ಮೂರ್ತಿಯು ಎರಡು, ಮೂರು, ನಾಲ್ಕು, ಎಂಟು, ಹತ್ತು ಅಥವಾ ಮೂವತ್ತೆರಡು ಕೈಗಳನ್ನು ಹೊಂದಿರಬಹುದು. ಈ ಕೈಗಳಲ್ಲಿ ಹಿಡಿದಿರುವ ವಸ್ತುಗಳು ಇಂತಿರಬಹುದು: ತ್ರಿಶೂಲ, ಚಕ್ರ, ಪರಶು, ಡಮರು, ಅಕ್ಷಮಾಲೆ, ಜಿಂಕೆ, ಪಾಶ, ದಂಡ, ಪಿನಾಕ ಅಥವಾ ಅಜಗವ (ಬಿಲ್ಲು), ಖಟ್ವಾಂಗ (ಮಂತ್ರದಂಡ), ಪಾಶುಪತ (ಈಟಿ), ಪದ್ಮ, ಕಪಾಲ, ದರ್ಪಣ (ಕನ್ನಡಿ), ಮತ್ತು ಖಡ್ಗ ಇತ್ಯಾದಿ.

ಇವುಗಳೆಲ್ಲಕ್ಕೂ ಅರ್ಥ ವಿವರಣೆ ನೀಡುವುದು ಕಷ್ಟವೇ. ಆದರೆ ಕೆಲವಕ್ಕೆ ವಿವರಣೆ ನೀಡಲು ಈ ಕೆಳಗೆ ಪ್ರಯತ್ನಿಸಲಾಗಿದೆ.

ತ್ರಿಶೂಲವು ರಕ್ಷಣೆಯ ಮತ್ತು ಆಕ್ರಮಣದ ಒಂದು ಮುಖ್ಯ ಆಯುಧ. ಶಿವನೇ ಮಹಾ ಅಧಿಪತಿ ಎಂಬುದನ್ನು ಇದು ವ್ಯಕ್ತಪಡಿಸುತ್ತದೆ. ತತ್ತ್ವಶಾಸ್ತ್ರದ ನೆಲೆಯಲ್ಲಿ ಇದು ತ್ರಿಗುಣಗಳನ್ನು, ಅಂದರೆ ಸೃಷ್ಟಿ ಸ್ಥಿತಿ ಲಯಗಳನ್ನು ಪ್ರತಿನಿಧಿಸುತ್ತದೆ. ಆದುದರಿಂದ ತ್ರಿಶೂಲ ಧಾರಿಯಾದ ಶಿವನು ತ್ರಿಗುಣಗಳ ಒಡೆಯನು ಮತ್ತು ಅವನಿಂದಲೇ ಬ್ರಹ್ಮಾಂಡ ಕ್ರಿಯೆಗಳ ಆರಂಭ ಎಂದು ತಿಳಿಯಬಹುದು.

ಶಿವನು ತಾಂಡವನೃತ್ಯ ಮಾಡುತ್ತಿರುವಾಗ ತನ್ನ ಡಮರುಘನ್ನು ಹದಿನಾಲ್ಕು ಬಾರಿ ನುಡಿಸಿದನೆಂದು, ಆಗ ಅ-ಇ-ಉಣ್, ಋ-ಲ್ೃ-ಕ್ ಮೊದಲಾದ ಸ್ವರಗಳು, ಅಂದರೆ **ಮಾಹೇಶ್ವರ ಸೂತ್ರಗಳು**, ಎಲ್ಲ ಅಕ್ಷರಗಳಿಗೂ ಮೂಲವಾದ, ಅತಿ ಚಾತುರ್ಯದಿಂದ ಜೋಡಿಸಲಾದ ಹದಿನಾಲ್ಕು ಮೂಲಸೂತ್ರಗಳು, ಹೊರಬಿದ್ದವೆಂದೂ, ಮುಂದೆ ವ್ಯಾಕರಣ ಪ್ರಕ್ರಿಯೆಗಳಿಗೂ ಇದು ಅವಕಾಶ ಕಲ್ಪಿಸಿಕೊಟ್ಟಿತೆಂದೂ ಹೇಳಲಾಗಿದೆ. ಆದ್ದರಿಂದ ಡಮರುವು ವರ್ಣಗಳ ಮತ್ತು ವ್ಯಾಕರಣದ ಅಥವಾ ಭಾಷೆಯ ಪ್ರತಿನಿಧಿ ಎಂದೇ ಹೇಳಬಹುದು. ಇದನ್ನೇ ಬೇರೆ ರೀತಿಯಲ್ಲಿ ಹೇಳುವುದಾದರೆ, ವ್ಯಕ್ತವಾಗುವ ಬರಹ ರೂಪದ ಅಥವಾ ಶಬ್ದರೂಪದ (ಮೌಖಿಕ) ಪದಗಳ ಮತ್ತು ಎಲ್ಲ ಬಗೆಯ ಧಾರ್ಮಿಕ ವೈಜ್ಞಾನಿಕ ಮತ್ತು

ಸಾಮಾನ್ಯ ಕಲೆಯ ಪ್ರತೀಕವೇ ಡಮರು. ಯಾವ ಸಾಂಕೇತಿಕ ಶಬ್ದರೂಪದಿಂದ ಇಡೀ ವಿಶ್ವದ ಸೃಷ್ಟಿಯಾಗಿದೆಯೋ ಅದನ್ನೂ ಡಮರು ಪ್ರತಿನಿಧಿಸುವುದು. ಡಮರುವನ್ನು ಕೈಯಲ್ಲಿ ಹಿಡಿದ ಶಿವನು ಇಡೀ ಸೃಷ್ಟಿಯನ್ನು, ಅದರ ಕಲೆ-ವಿಜ್ಞಾನಗಳನ್ನೂ, ತನ್ನ ಸಂಕಲ್ಪ ದಿಂದ ಲೀಲೆಗಾಗಿ ಸೃಜಿಸಿದ್ದಾನೆಂದು ಸೂಚಿಸುತ್ತಾನೆ.

ಅಕ್ಷಮಾಲೆಯು ಶಿವನು ಅಧ್ಯಾತ್ಮವಿಜ್ಞಾನದ ಆದಿಗುರುವೆಂದು ಸೂಚಿಸಿದರೆ ಖಟ್ವಾಂಗವು (ಒಂದು ತುದಿಯಲ್ಲಿ ತಲೆಬುರುಡೆಯನ್ನು ಹೊಂದಿರುವ ಮಂತ್ರದಂಡ) ಅವನು ಮಂತ್ರವಿದ್ಯೆಯಲ್ಲೂ ಪ್ರವೀಣ ನೆಂದು ತೋರಿಸುವುದು. ಶಿವನು ರಕ್ತಪಾನ ಮಾಡುವ ಕಪಾಲವು ಅವನ ಸರ್ವವಿನಾಶಶಕ್ತಿಯ ಮತ್ತೊಂದು ಸಂಕೇತ. ದರ್ಪಣವು ಇಡೀ ಸೃಷ್ಟಿಯು ಶಿವನ ರೂಪದ ಪ್ರತಿಬಿಂಬವೆಂಬುದನ್ನು ಸೂಚಿಸುತ್ತದೆ.

ಶಿವನ ವಿಗ್ರಹವು ಎಂದೂ ಮೂಲಮೂರ್ತಿಯಾಗಿ, ಅಂದರೆ, ಗರ್ಭಗುಡಿಯಲ್ಲಿ ಪ್ರತಿಷ್ಠಿತವಾಗಿ, ಪೂಜಿಸಲ್ಪಡುವುದಿಲ್ಲ. ಕೇವಲ ಉತ್ಸವಮೂರ್ತಿಯಾಗಿ (ಹಬ್ಬದ ದಿನಗಳಲ್ಲಿ ಮೆರವಣಿಗೆಗೆ ಬಳಸುವ ಮೂರ್ತಿ) ಪೂಜೆಗೊಳಗಾಗುವುದು.

### ಶಿವಲಿಂಗ

ಶಿವ ಪ್ರತೀಕವಾಗಿ ಜಗತ್ತಿನಲ್ಲೆಲ್ಲ ಪೂಜಿಸಲ್ಪಡುವ ಲಿಂಗದ

ವಿಷಯವಾಗಿ ಹೆಚ್ಚಿನ ವಿವರಗಳನ್ನು ತಿಳಿಯುವುದು ಸೂಕ್ತ. ಶಿವ ಎಂದರೆ ಸಾಮಾನ್ಯ ಅರ್ಥ ಶುಭಕರ ಎಂದು. ಮತ್ತು ಲಿಂಗ ಎಂದರೆ ಒಂದು ಸಂಕೇತ ಅಥವಾ ಒಂದು ಗುರುತು. ಆದ್ದರಿಂದ 'ಶಿವಲಿಂಗ' ಎಂಬುದು ಸರ್ವಶುಭಕರನಾದ ಮಹಾದೇವನ ಸಂಕೇತ. ಹಿಂದೆಯೇ ವಿವರಿಸಿದಂತೆ, ಪ್ರಳಯವಾದ ಬಳಿಕ ಇಡೀ ವಿಶ್ವವೇ ಯಾರಲ್ಲಿ ಲೀನವಾಗಿ ನಿದ್ರಾವಸ್ಥೆಯಲ್ಲಿರುವುದೊ ಆತನೇ 'ಶಿವ'. ಲಿಂಗ ಎಂಬುದಕ್ಕೂ ಇದೇ ಅರ್ಥ. ಪ್ರಪಂಚದ ವಸ್ತುವೆಲ್ಲವೂ ಪ್ರಳಯಕಾಲದಲ್ಲಿ ಯಾವುದರೊಳಗೆ ವಿಲೀನವಾಗಿಬಿಡುವುದೋ ಅದೇ ಲಿಂಗ. ಹಿಂದೂ ಧರ್ಮದ ಪ್ರಕಾರ ಸೃಷ್ಟಿ-ಸ್ಥಿತಿ-ಲಯ ಕಾರ್ಯ ಗಳು ಒಬ್ಬನೇ ದೇವನಿಂದ ಜರುಗುವ ಕಾರಣ ಲಿಂಗವು ಆ ಮಹಾ ದೇವನನ್ನೇ ಸಾಂಕೇತಿಕವಾಗಿ ಪ್ರತಿನಿಧಿಸುವುದು.

ಶಿವಲಿಂಗವು ಶಿಶ್ನದ ಚಿಹ್ನೆಯೋ ಅಲ್ಲವೋ ಎಂಬುದು ಚರ್ಚಾಸ್ಪದ ವಿಷಯ. ಸೃಷ್ಟಿ ಶಕ್ತಿಯ ಚಿಹ್ನೆಯಾಗಿ ಶಿಶ್ನವನ್ನು ಆರಾಧಿ ಸುವ ಪದ್ಧತಿ ಎಲ್ಲ ದೇಶದಲ್ಲೂ ಎಲ್ಲ ನಾಗರಿಕತೆಗಳಲ್ಲೂ ಕಂಡು ಬರುತ್ತದೆ. ಹಿಂದೂಗಳು ಇದನ್ನು ಯಾವುದೋ ಮೂಲನಿವಾಸಿ ಗಳಿಂದ ಪಡೆದುಕೊಂಡಿದ್ದಿರಬಹುದು. ಈ ಆರಾಧನೆಯೇ ಮುಂದೆ ಸೃಷ್ಟಿಯ ಮಾತಾ-ಪಿತೃತತ್ತ್ವ ಪ್ರತಿಪಾದಕವಾಗಿ ಔನ್ನತ್ಯಕ್ಕೆ ಒಳಗಾಯಿ ತೆಂಬುದು ಒಂದು ಬಗೆಯ ನಿಲುವು. ವೈದಿಕ ಕಾಲದಲ್ಲಿ ಬಲಿಪಶು ಗಳನ್ನು ಬಂಧಿಸಲು ಬಳಸುತ್ತಿದ್ದ ಯೂಪಸ್ತಂಭದ ಸಂಕೇತ ಇದೆಂದು

ಮತ್ತೊಂದು ಅಭಿಪ್ರಾಯವಿದೆ. ಈ ಅಭಿಪ್ರಾಯದಂತೆ ಹಿಂದೂ ದೇವಸ್ಥಾನಗಳು ರೂಪಾಂತರಗೊಂಡ ಯಾಗಶಾಲೆಗಳೇ ಆಗಿವೆ. ಬೌದ್ಧಸ್ತೂಪಗಳ ಅನುಕರಣೆಯೇ ಇದೆಂದು ಮತ್ತೆ ಕೆಲವರು ಹೇಳುತ್ತಾರೆ. ಆದರೆ ಬುದ್ಧಪೂರ್ವದ ಅವಶೇಷಗಳಾದ ಹರಪ್ಪಾ ಮೊಹೆಂಜೋದಾರೋಗಳಲ್ಲಿಯೂ ಶಿವಲಿಂಗವು ಕಂಡುಬರುವುದ ರಿಂದ ಮೇಲಿನ ಹೇಳಿಕೆಗೆ ಆಧಾರವಿಲ್ಲ.

ದೇವರು ನಾಮರೂಪಗಳಿಗೆ ಅತೀತನಾದ್ದರಿಂದ, ಈ ಅಮೂರ್ತ ತತ್ತ್ವವನ್ನು ನಾವು ಗ್ರಹಿಸುವುದು ಅಸಾಧ್ಯವಾದ್ದರಿಂದ, ಒಂದು ಸಾಕಾರ ಚಿಹ್ನೆಯನ್ನು ಇದಕ್ಕಾಗಿ ನಾವು ಬಳಸುತ್ತೇವೆ. ದುಂಡಗಿನ ವಸ್ತುಗಳು ಈ ನಿಟ್ಟಿನಲ್ಲಿ ಮೇಲಿನ ತತ್ತ್ವಕ್ಕೆ ಹೆಚ್ಚು ಸಮೀಪದವು ಎಂದು ಭಾವಿಸಬಹುದು.

ಶಿವಲಿಂಗಗಳು ಚಲ (ಚಲಿಸಲಾಗುವವು) ಮತ್ತು ಅಚಲ (ಚಲಿಸಲಾಗದಂತೆ ಸ್ಥಾಪಿತಗೊಂಡವು) ಎಂದು ಎರಡು ಬಗೆಯವು. ಚಲಲಿಂಗಗಳನ್ನು ನಮ್ಮ ಮನೆಯಲ್ಲಿಯೇ ಪೂಜಾಸ್ಥಳದಲ್ಲಿ ಇರಿಸಿ ಕೊಂಡಿರುತ್ತೇವೆ. ಅಲ್ಲದೆ ಇವುಗಳನ್ನು ತಾತ್ಕಾಲಿಕವಾಗಿ ಮಣ್ಣು ಅಥವಾ ಹಿಟ್ಟಿನಿಂದ ಮಾಡಿಕೊಂಡು ಪೂಜಾಸಂಸ್ಕಾರದ ಬಳಿಕ ವಿಸರ್ಜಿಸುತ್ತೇವೆ. ವೀರಶೈವರು ಇಷ್ಟಲಿಂಗವನ್ನು ಮೈಮೇಲೆ ಧರಿಸು ತ್ತಾರೆ. ದೇವಾಲಯಗಳಲ್ಲಿ ಅಚಲ ಲಿಂಗವು ಸ್ಥಾಪನೆಗೊಳ್ಳುತ್ತವೆ. ಅವುಗಳನ್ನು ಸಾಮಾನ್ಯವಾಗಿ ಕಲ್ಲಿನಿಂದ ನಿರ್ಮಿಸುತ್ತಾರೆ. ಇವು

ಮೂರು ಭಾಗಗಳನ್ನು ಹೊಂದಿರುತ್ತವೆ. ಅತ್ಯಂತ ಕೆಳಗಿನ ಭಾಗವು ಚೌಕಾಕಾರವಾಗಿರುತ್ತದೆ. ಇದನ್ನು ಬ್ರಹ್ಮಭಾಗವೆನ್ನುವರು. ಇದು ಸೃಷ್ಟಿಕರ್ತ ಬ್ರಹ್ಮನ ಪ್ರತೀಕ. ಮಧ್ಯಭಾಗವು ಅಷ್ಟಕೋನಾಕಾರದಲ್ಲಿದ್ದು ವಿಷ್ಣುಭಾಗವೆಂದು ಕರೆಯಲ್ಪಡುತ್ತದೆ. ಇದು ಸ್ಥಿತಿಕಾರಕನಾದ ವಿಷ್ಣುವಿನ ಪ್ರತೀಕವು. ಈ ಎರಡೂ ಭಾಗಗಳು ಪೀಠದಲ್ಲಿ ಹುದುಗಿರುತ್ತವೆ. ದುಂಡನೆಯ ಕಂಭದೋಪಾದಿಯ ರುದ್ರಭಾಗವು ಪೀಠದ ಹೊರಗೆ ಕಾಣುವಂತಿದ್ದು ಪೂಜೆಗೆ ಅರ್ಹವಾಗಿರುತ್ತದೆ. ಅದರಿಂದಾಗಿ ಇದನ್ನು ಪೂಜಾಭಾಗವೆಂದೂ ಕರೆಯುವರು.

ಪೂಜಾಭಾಗವು ಕೆಲವು ಗೆರೆಗಳನ್ನು ಹೊಂದಿದ್ದು ಅದನ್ನು ತಾಂತ್ರಿಕ ಪರಿಭಾಷೆಯಲ್ಲಿ 'ಬ್ರಹ್ಮಸೂತ್ರಗಳು' ಎನ್ನುವರು. ಇದಿಲ್ಲದಿದ್ದರೆ ಲಿಂಗವು ಪೂಜೆಗೆ ಅನರ್ಹವೆನಿಸಿಕೊಳ್ಳುತ್ತದೆ.

## ಶಿವನ ವಿವಿಧ ರೂಪಗಳು

ವಿಷ್ಣುವಿನ ವ್ಯೂಹ ಅಥವಾ ಉದ್ಗಮ ರೂಪಗಳಿಗೆ ಶಿವನ ಪಂಚಾನನ ರೂಪವನ್ನು ಹೋಲಿಸಬಹುದು. ಪಂಚಾನನ ಅಥವಾ ಪಂಚಮುಖಿಯು ಶಿವನ ಐದು ರೂಪಗಳಿಗೆ, ಈ ಪಾಂಚಭೌತಿಕ ವಿಶ್ವಕ್ಕೆ ದ್ಯೋತಕವಾಗಿದೆ. ಆ ಐದು ಮುಖಗಳು ಕ್ರಮವಾಗಿ— ಈಶಾನ, ತತ್ಪುರುಷ, ಅಘೋರ, ವಾಮದೇವ ಮತ್ತು ಸದ್ಯೋಜಾತ. ಈಶಾನ ಮುಖವು ಕ್ಷಿತಿಜದತ್ತ ತಿರುಗಿದ್ದು ಅತ್ಯುನ್ನತ

ಅಂಶವನ್ನು ಸೂಚಿಸುವುದು. ಆದ್ದರಿಂದಲೇ ಇದನ್ನು ಸದಾಶಿವ ಎಂದೂ ಕರೆಯುವರು. ಭೌತಿಕ ನೆಲೆಯಲ್ಲಿ ಇದು ಆಕಾಶದ ಮೇಲಣ ಅಧಿಕಾರೀ ಶಕ್ತಿಯನ್ನು ಸೂಚಿಸಿದರೆ, ಆಧ್ಯಾತ್ಮಿಕ ನೆಲೆಯಲ್ಲಿ ಇದು ಮೋಕ್ಷವನ್ನು ಅಥವಾ ಮುಕ್ತಿಯನ್ನು ನೀಡುವ ದೇವತೆಯಾಗಿದೆ. ಪೂರ್ವಮುಖವಾಗಿರುವ ತತ್ಪುರುಷನು ಗಾಳಿಯ ಮೇಲಣ ಶಕ್ತಿಯನ್ನು ಸೂಚಿಸಿ, ಆಧ್ಯಾತ್ಮಿಕ ನೆಲೆಯಲ್ಲಿ ಅಂಧಕಾರವನ್ನು ಅಜ್ಞಾತ ತತ್ತ್ವವನ್ನು ಪ್ರತಿನಿಧಿಸುತ್ತಾನೆ. ಉತ್ತರಾಭಿಮುಖವಾಗಿರುವ ಅಘೋರನು ಅಗ್ನಿಯ ಮೇಲಧಿಕಾರಿಯಾಗಿ ವಿಶ್ವದ ಸ್ವೀಕಾರ್ಯ ಮತ್ತು ಸಂಸ್ಕಾರಕ ಶಕ್ತಿಯ ಪ್ರತಿನಿಧಿಯಾಗಿದ್ದಾನೆ. ವಾಮದೇವನು ದಕ್ಷಿಣಾಭಿಮುಖಿಯಾಗಿದ್ದು ಜಲದ ಮೇಲಿನ ಶಕ್ತಿಯಾಗಿ ಸಂರಕ್ಷಣಾ ಗುಣದವನಾಗಿರುತ್ತಾನೆ. ಪಶ್ಚಿಮಾಭಿಮುಖವಾದ ಸದ್ಯೋಜಾತನು ಭೂಮಿಯ ಮೇಲಣ ಅಧಿಕಾರಿಯಾಗಿದ್ದು ಸೃಷ್ಟಿ ಶಕ್ತಿಯ ಸಂಕೇತವಾಗಿರುತ್ತಾನೆ.

ಶಿಲ್ಪಮೂರ್ತಿಗಳಲ್ಲಿ ಈ ಐದು ರೂಪಗಳನ್ನು ಬೇರೆಬೇರೆಯಾಗಿಯೇ ತೋರಿಸುತ್ತಾರೆ.

ಇವಿಷ್ಟೇ ಅಲ್ಲದೆ ಶಿವನನ್ನು ಇನ್ನೂ ವಿವಿಧ ರೂಪಗಳಲ್ಲಿ ಚಿತ್ರಿಸುತ್ತಾರೆ ಮತ್ತು ಪೂಜಿಸುತ್ತಾರೆ. ಇವುಗಳನ್ನು ಮುಖ್ಯವಾಗಿ ಹೀಗೆ ವಿಭಾಗಿಸಬಹುದು: (೧) ಸೌಮ್ಯ ಅಥವಾ ಅನುಗ್ರಹ ಮೂರ್ತಿ; (೨) ಉಗ್ರ, ರುದ್ರ ಅಥವಾ ಸಂಹಾರಮೂರ್ತಿ; (೩) ನೃತ್ಯ ಅಥವಾ

ತಾಂಡವ ಮೂರ್ತಿ; (೪) ದಕ್ಷಿಣಾಮೂರ್ತಿ; (೫) ಲಿಂಗೋದ್ಭವ ಮೂರ್ತಿ; (೬) ಭಿಕ್ಷಾಟನಮೂರ್ತಿ; (೭) ಹರ್ಯರ್ಧಮೂರ್ತಿ ಅಥವಾ ಹರಿಹರಮೂರ್ತಿ; (೮) ಅರ್ಧನಾರೀಶ್ವರಮೂರ್ತಿ.

ಶಾಂತರೂಪದ ವರದಾಯಕ ಶಿವನ ಮೂರ್ತಿಗಳನ್ನು ಮೊದಲಗುಂಪಿಗೆ ಸೇರಿಸಬಹುದು. ಕರುಣೆಯನ್ನು ತೋರುತ್ತಿರುವ ಚಂಡೇಶ, ನಂದೀಶ್ವರ, ವಿಘ್ನೇಶ್ವರ ಮತ್ತು ರಾವಣನಿಗೆ ವರ ನೀಡುತ್ತಿರುವ ಶಿವನ ರೂಪಗಳು ಈ ವರ್ಗಕ್ಕೆ ಸೇರುವುವು.

ಶಿವನ ಭಯಂಕರ ರೂಪಗಳನ್ನು ಎರಡನೆ ವರ್ಗಕ್ಕೆ ಸೇರಿಸಬಹುದು. ಬ್ರಹ್ಮನ ಶಿವನಿಂದೆಗೆ ಶಿಕ್ಷೆಯಾಗಿ ಅವನ ಐದನೆ ತಲೆಯನ್ನು ಚಿವುಟಿಹಾಕಿದ ರೂಪವೇ ಕಂಕಾಳ ಭೈರವರೂಪ. ಈ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಕಂಕಾಳ ಭೈರವನು ೧೨ ವರ್ಷಗಳ ಕಾಲ ಭಿಕ್ಷುಕನಾಗಿ ಅಲೆಯಬೇಕಾಯಿತು. ಅಂಧಕಾಸುರನ ಸಹವರ್ತಿಯಾದ ನೀಲನು ಆನೆಯ ರೂಪ ತಳೆದಿದ್ದನು. ಅವನನ್ನು ಕೊಲ್ಲುತ್ತಿರುವ ಮೂರ್ತಿ ಗಜಾಸುರವಧಮೂರ್ತಿ. ಕಬ್ಬಿಣ, ಬೆಳ್ಳಿ ಮತ್ತು ಚಿನ್ನದ ನಗರಗಳಾಗಿದ್ದು ಕ್ರಮವಾಗಿ ಭೂಮಿ, ಅಂತರಿಕ್ಷ ಮತ್ತು ಸ್ವರ್ಗದಲ್ಲಿ ಸ್ಥಾಪಿತಗೊಂಡಿದ್ದ ಅಂಧಕಾಸುರನ ಮೂವರು ಮಕ್ಕಳ ಅಭೇದ್ಯ ಕೋಟೆಗಳಾಗಿದ್ದ ಮೂರು ನಗರಗಳನ್ನು ತನ್ನ ಬಾಣದಿಂದ ನಾಶ ಮಾಡುತ್ತಿರುವ ಮೂರ್ತಿಯೇ ತ್ರಿಪುರಾಂತಕಮೂರ್ತಿ. ಸಿಂಹಕ್ಕಿಂತಲೂ ಪರಾಕ್ರಮಶಾಲಿಯಾದ ಶರಭದ ರೂಪ ಧರಿಸಿ ವಿಷ್ಣುವಿನ



ಹರ್ಯರ್ಧಮೂರ್ತಿ

ನರಸಿಂಹ ರೂಪವನ್ನು ನಾಶಮಾಡುತ್ತಿರುವ ರೂಪವೇ ಶರಭ ಮೂರ್ತಿ. ತಮ್ಮ ದೇವರ ಪ್ರಾಬಲ್ಯವನ್ನು ಸ್ಥಾಪಿಸಲು ಶೈವರು ಈ ಕಥೆಯನ್ನು ಕಲ್ಪಿಸಿದ್ದಾರೆ. ತನ್ನ ಭಕ್ತ ಮಾರ್ಕಂಡೇಯನ ಪ್ರಾಣವನ್ನು ತೆಗೆಯಲು ಬಂದ ಯಮನನ್ನು ದಂಡಿಸುತ್ತಿರುವ ಶಿವನನ್ನು ಚಿತ್ರಿಸುವುದು ಅವನ ಕಾಲಾರಿಮೂರ್ತಿರೂಪ. ಕಾಮಪ್ರಚೋದಕನಾದ ಕಾಮದೇವನನ್ನು ತನ್ನ ಮೂರನೇ ಕಣ್ಣಿನ ಜ್ವಾಲೆಯಿಂದ ದಹಿಸುತ್ತಿರುವವನೇ ಕಾಮಾಂತಕಮೂರ್ತಿರೂಪದ ಶಿವ. ಅಂಧಕಾಸುರವಧ ಮೂರ್ತಿಯು ಅಂಧಕಾಸುರನನ್ನು ಮಣಿಸುತ್ತಿರುವ ರೂಪ, ಅನಂತರ ಅವನು ಕ್ಷಮೆ ಬೇಡಿದಾಗ ಅವನನ್ನು ಗಣಗಳ (ಗುಜ್ಜಾರಿ ಸೇವಕಗಣ) ಮುಖ್ಯಸ್ಥನನ್ನಾಗಿ ಮಾಡುತ್ತಾನೆ. ಅಂಧಕನೇ ಭೃಂಗೀಶನಾಗುತ್ತಾನೆ.

ಶಿವನು ನಾಟ್ಯಕಲಾವಿಶಾರದ. ನೃತ್ಯಕಲೆಯ ಎಲ್ಲ ೧೦೮ ವಿಧಾನಗಳು ಇವನಿಂದ ಬಂದವೇ ಆಗಿವೆ. ಜೀವಿಗಳ ಕ್ಲೇಶಹರಣಕ್ಕೂ, ಕೈಲಾಸದಲ್ಲಿ ನೆರೆಯುವ ಜೀವಗಣದ ಮನರಂಜನೆಗಾಗಿಯೂ ಶಿವನು ಪ್ರತಿಸಂಜೆಯೂ ನೃತ್ಯಮಾಡುತ್ತಾನೆ. (ಆದ್ದರಿಂದಲೇ ಅವನನ್ನು ಸಭಾಪತಿ, ಸಭೆಯ ಮುಖ್ಯಸ್ಥ-ಅಧಿಪತಿ ಎಂದು ಕರೆಯುತ್ತಾರೆ.)

ಶಿವನ ಒಂಬತ್ತು ಬಗೆಯ ನೃತ್ಯಭಂಗಿಗಗಳನ್ನು ಮಾತ್ರ ಪ್ರಧಾನವಾಗಿ ವಿವರಿಸಲಾಗಿದೆ. ಅದರಲ್ಲಿಯೂ ನಟರಾಜ ಭಂಗಿಯು

ಪ್ರಸಿದ್ಧವಾದದ್ದು. ನಟರಾಜ ಮೂರ್ತಿಯಲ್ಲಿ ಶಿವನಿಗೆ ನಾಲ್ಕು ಕೈಗಳು, ಎರಡು ಕಾಲುಗಳು–ನೃತ್ಯ ಭಂಗಿ. ಮೇಲಿನ ಬಲಗೈಯಲ್ಲಿ ಡಮರುವಿದ್ದರೆ, ಮೇಲಿನ ಎಡಗೈಯಲ್ಲಿ ಅಗ್ನಿಯಿದೆ. ಬಲದ ಕೆಳಗೈ ಅಭಯ ಮುದ್ರೆಯಲ್ಲಿದ್ದರೆ, ಎಡದ ಕೆಳಗೈ ಮೇಲೆತ್ತಿದ್ದ ಎಡಪಾದ ದತ್ತ ತೋರುತ್ತಿದೆ. ಬಲಪಾದವು ಅಪಸ್ಮಾರ-ಅಸುರನ ಮೇಲೆ ಊರಿದೆ. ಇಡೀ ಮೂರ್ತಿಯು ಉರಿಯುತ್ತಿರುವ ಬೆಂಕಿಯಿಂದ ಆವೃತವಾಗಿದ್ದಿರಲೂ ಬಹುದು–ಇಲ್ಲದೆಯೂ ಇರಬಹುದು.

ಶಿವನ ನೃತ್ಯವು ನಿರಂತರವಾಗಿ ನಡೆಯುತ್ತಿರುವ ಸೃಷ್ಟಿ-ಸ್ಥಿತಿ-ಲಯಗಳ ಸಂಕೇತವಾಗಿದೆ. ಡಮರುವು ಶಬ್ದತತ್ತ್ವದ ಪ್ರತೀಕ ಮತ್ತು ಆತ್ಮದಿಂದ ತಕ್ಷಣ ಹೊಮ್ಮುವ ಆಕಾಶ, ಅದರಿಂದ ಮುಂದುವರಿಯುವ ಸೃಷ್ಟಿಯ ಅಥವಾ ವಿಕಾಸದ ಪ್ರತೀಕ. ಬೆಂಕಿಯು ಪ್ರಳಯ ಕಾಲದಲ್ಲಿ ಪ್ರಪಂಚವನ್ನು ನಾಶಮಾಡುವ ಪ್ರಳಯಾಗ್ನಿಯ ಸಂಕೇತ. ಇದು ವಿನಾಶದ ಸಂಕೇತವೂ ಹೌದು. ಹೀಗೆ ಡಮರು ಮತ್ತು ಬೆಂಕಿಗಳು ಸೃಷ್ಟಿ-ಸ್ಥಿತಿ-ಲಯಗಳ ನಿರಂತರ ಚಕ್ರವನ್ನು ಪ್ರತಿನಿಧಿಸುತ್ತವೆ. ಉಳಿದೆರೆಡು ಕೈಗಳು ಶಿವನ ಮೊರೆಹೊಕ್ಕವರ ಅಭಯ-ರಕ್ಷಣೆಯ ಸಂಕೇತವನ್ನು ನೀಡುತ್ತವೆ. ಅಜ್ಞಾನದ ಮೂಲಕ ನಮ್ಮ ಪ್ರಜ್ಞೆಯನ್ನು, ಸಮತೋಲನವನ್ನು ಕಳೆದುಕೊಳ್ಳುತ್ತಿರುವುದರ ಸಂಕೇತವೇ ಅಪಸ್ಮಾರ ಪುರುಷ (ಅಪಸ್ಮಾರ = ಮೂರ್ಛೆ). ಭಕ್ತರ ಒಳಿತಿಗಾಗಿ ಅವನನ್ನು ತುಳಿಯುವ ಶಿವನು, ತನ್ಮೂಲಕ ಮೊರೆಹೊಕ್ಕ ಭಕ್ತರನ್ನು ಕಾಪಾಡುವನು.

ಶಿವನ ಇನ್ನೂ ಅನೇಕ ನೃತ್ಯಭಂಗಿಗಳಿವೆ. ಆಗಮಗಳಲ್ಲಿ ಆನಂದತಾಂಡವಮೂರ್ತಿ, ಉಮಾತಾಂಡವಮೂರ್ತಿ, ತ್ರಿಪುರ ತಾಂಡವಮೂರ್ತಿ ಮತ್ತು ಊರ್ಧ್ವತಾಂಡವಮೂರ್ತಿ ಎಂಬುವನ್ನೂ ಉಲ್ಲೇಖಿಸಲಾಗಿದೆ.

ಶಿವನು ಯೋಗಾಚಾರ್ಯ, ಅಧ್ಯಾತ್ಮದ ಆಚಾರ್ಯ, ಸಂಗೀತ ನೃತ್ಯ ಮತ್ತು ಇತರ ಕಲೆಗಳಿಗೂ ಮಹಾ ಗುರು. ವಿಶ್ವದ ಗುರುವಾಗಿ ಇವನೇ ದಕ್ಷಿಣಾಮೂರ್ತಿ. ಹಿಮಾಲಯದ ಪ್ರಶಾಂತ ತಪ್ಪಲಿನಲ್ಲಿ ಶಿವನು ದಕ್ಷಿಣಾಭಿಮುಖವಾಗಿ ಕುಳಿತು ಋಷಿಗಳಿಗೆ ವಿದ್ಯೆ ಕಲಿಸಿದ್ದರಿಂದ ಇವನಿಗೆ 'ದಕ್ಷಿಣಾಮೂರ್ತಿ' ಎಂಬ ಹೆಸರು ಬಂದಿತು. ದಕ್ಷಿಣಾಮೂರ್ತಿಗೆ ಮೂರು ಕಣ್ಣುಗಳು ಮತ್ತು ನಾಲ್ಕು ಕೈಗಳು, ಎರಡು ಕಾಲುಗಳಲ್ಲಿ ಒಂದು ಕಾಲು ಅಪಸ್ಮಾರ ಪುರುಷನನ್ನು ತುಳಿಯುತ್ತಿದೆ. ಮುಂಭಾಗದ ಬಲ-ಎಡ ಕೈಗಳು ಜ್ಞಾನಮುದ್ರೆ ಮತ್ತು ವರದಮುದ್ರೆಗಳನ್ನು ಧರಿಸಿವೆ (ಜ್ಞಾನ ಮತ್ತು ಅಭೀಷ್ಟಗಳನ್ನು ನೀಡುವ ಸಂಕೇತ). ಹಿಂದಿನ ಕೈಗಳು ಅಕ್ಷಮಾಲೆಯನ್ನು ಹಾಗೂ ಬೆಂಕಿ ಅಥವಾ ಸರ್ಪವನ್ನು ಹಿಡಿದಿವೆ. ಪರಿಪೂರ್ಣ, ಶುದ್ಧ ಗುರುವಿನ ಆದರ್ಶರೂಪವೇ ದಕ್ಷಿಣಾಮೂರ್ತಿ. ಆತ್ಮವಿದ್ಯೆಯನ್ನು ಕಲಿಯಲು ಆಸಕ್ತವಾಗಿರುವ ಋಷಿಗಳ ತಂಡವೇ ಇವನನ್ನು ಸುತ್ತುವರಿದಿರುತ್ತದೆ.

ಬ್ರಹ್ಮನ ಮತ್ತು ವಿಷ್ಣುವಿನ ಗರ್ವವನ್ನು ಮುರಿಯಲು ಶಿವನು

ಬೃಹತ್ ಅಗ್ನಿಯ ಸ್ತಂಭವಾಗಿ ಕಾಣಿಸಿಕೊಂಡನೆಂಬ ಹೇಳಿಕೆಯೂ ಇದೆ. ಶಿವನು ಲಿಂಗದ ಹೃದಯಭಾಗದಲ್ಲಿ ಪ್ರಕಟಗೊಳ್ಳುತ್ತಿರುವ ರೀತಿಯಲ್ಲಿ ಲಿಂಗೋದ್ಭವಮೂರ್ತಿ ಇರುತ್ತದೆ. ಈ ರೂಪದಲ್ಲಿ ಶಿವನಿಗೆ ನಾಲ್ಕು ಕೈಗಳು; ಬ್ರಹ್ಮ ಮತ್ತು ವಿಷ್ಣು ಅವನ ಇಕ್ಕೆಲಗಳಲ್ಲಿ ಪೂಜ್ಯಭಾವದಿಂದ ನಿಂತಿರುತ್ತಾರೆ.

ನಗ್ನ ಭೈರವನಾಗಿ ಕಪಾಲದಲ್ಲಿ ಭಿಕ್ಷೆ ಬೇಡುತ್ತಿರುವ ರೂಪ ಭಿಕ್ಷಾಟನಮೂರ್ತಿಯದು. ಹೆಚ್ಚು ಕಡಮೆ ಇದು ಕಂಕಾಳಮೂರ್ತಿಯನ್ನೇ ಹೋಲುವುದು.

ಶಿವನನ್ನು ಬಲ ಅರ್ಧಭಾಗದಲ್ಲೂ , ವಿಷ್ಣುವನ್ನು ಎಡ ಅರ್ಧ ಭಾಗದಲ್ಲೂ ಹೊಂದಿರುವುದೇ ಹರ್ಯರ್ಧಮೂರ್ತಿ ಅಥವಾ ಹರಿ-ಹರ-ಮೂರ್ತಿ. ಇವನನ್ನು 'ಶಂಕರನಾರಾಯಣ' ಎಂದೂ ಕರೆಯುವರು. ಎರಡು ತತ್ತ್ವಗಳ ಸಮನ್ವಯದ ಪ್ರತಿಪಾದಕವಾದ ಈ ಮೂರ್ತಿಯು ಪರಸ್ಪರ ಕಾದಾಡುತ್ತಿದ್ದ ಶಿವ-ವಿಷ್ಣು ಪಂಥದವರ ಸೌಹಾರ್ದಕ್ಕೆ ಪ್ರೇರಕವಾದ ರೂಪವಾಗಿದೆ.

ಅರ್ಧನಾರೀಶ್ವರ ರೂಪವು (ಅರ್ಧ ಪುರುಷ, ಅರ್ಧ ಸ್ತ್ರೀ ರೂಪ) ಪಾರ್ವತಿಯನ್ನು ಎಡ ಅರ್ಧದಲ್ಲಿ ಹೊಂದಿರುತ್ತದೆ. ಇದು ಸೃಷ್ಟಿಯ ದ್ವಿ-ಧ್ರುವ ಸ್ವಭಾವದ ಸಂಕೇತವಾಗಿದೆ ಮತ್ತು ಪುರುಷನಿಗೆ ಸಮಾನವೂ ಪರಿಪೂರಕವೂ ಆಗಿ ಸ್ತ್ರೀಯನ್ನು ಕಾಣಬೇಕೆಂದು ಇದು ಸೂಚಿಸುವುದು.

## ಶಿವನೊಂದಿಗಿರುವ ಪರಿವಾರ ದೇವತೆಗಳು

ನಂದಿಯಿಲ್ಲದೆ ಶಿವದೇವಾಲಯವಿರುವುದಿಲ್ಲ. ಗರ್ಭಗುಡಿಯ ಎದುರಿಗೇ ನಂದಿಯ ಸ್ಥಾನ. ನಂದಿ ಅಥವಾ ನಂದಿಕೇಶ್ವರನನ್ನು ಶಿವನಂತೆಯೇ ಚಿತ್ರಿಸಲಾಗುವುದು–ಮೂರು ಕಣ್ಣು ಮತ್ತು ಎರಡು ಕೈಗಳು, ಒಂದರಲ್ಲಿ ಪರಶುವನ್ನು (ಯುದ್ಧಗೊಡಲಿಯನ್ನು) ಮತ್ತೊಂದರಲ್ಲಿ ಜಿಂಕೆಯನ್ನು ಹಿಡಿದಿರುವನು. ಉಳಿದೆರೆಡು ಕೈಗಳು ಸೇರಿ (ಅಂಜಲೀಬದ್ಧ) ನಮಸ್ಕಾರ ಮಾಡುವಂತಿರುತ್ತವೆ. ಹೆಚ್ಚಾಗಿ ವೃಷಭ ಮುಖದ ಮನುಷ್ಯನಾಗಿಯೋ ಅಥವಾ ಪೂರ್ಣವಾಗಿ ವೃಷಭದ ರೂಪದಲ್ಲಿಯೋ ನಂದಿಯನ್ನು ಚಿತ್ರಿಸಲಾಗುತ್ತದೆ.

ಪುರಾಣಗಳ ಪ್ರಕಾರ ನಂದಿಯು ಶಿವನ ಬಲಭಾಗದಿಂದ ಜನಿಸಿದವನು, ಶಿವನನ್ನೇ ಹೋಲುವವನು. ಮಹಾತಪಸ್ವಿಗಳಾದ ಸಾಲಂಕಾಯನ ಋಷಿಗಳಿಗೆ ಮಗನಾಗಿ ಇವನನ್ನು ಶಿವನು ನೀಡುತ್ತಾನೆ. ಇತರ ಕೆಲವು ಪಾಠಾಂತರಗಳಲ್ಲಿ ಇವನು ಶಿವಕೃಪೆಯಿಂದ ಶಿಲಾದ ಎಂಬ ಮುನಿಗಳಿಗೆ ಮಗನಾಗಿ ಜನಿಸಿದನೆಂದು ವರ್ಣಿಸಲಾಗಿದೆ.

ನಂದಿಕೇಶ್ವರನು ಶಿವಗಣಗಳಿಗೆ ನಾಯಕನು. ಇವನನ್ನು ಅಧಿಕಾರನಂದಿ ಎಂದೂ ಕರೆಯುವುದುಂಟು. ಇವನು ಶಿವನ ವಾಹನವೂ ಹೌದು.

ಸಾಂಕೇತಿಕವಾಗಿ ವೃಷಭವು ಪಶುಸಂವೇದನೆಯನ್ನು ಸೂಚಿಸುವುದು; ಮುಖ್ಯವಾಗಿ ಅದು ಕಾಮಪ್ರವೃತ್ತಿಯ ದ್ಯೋತಕ. ಶಿವನು ಇದನ್ನು ವಾಹನವಾಗಿ ಮಾಡಿಕೊಂಡಿದ್ದಾನೆಂದರೆ, ಅದನ್ನು ಜಯಿಸಿ ತನ್ನ ಪ್ರಭುತ್ವವನ್ನು ಸ್ಥಾಪಿಸಿದ್ದಾನೆಂದು ಅರ್ಥ.

ನಂದಿಯ ಅನಂತರ ಬರುವ ಪ್ರಮುಖನು ಭೃಂಗಿ. ಈತನು ಶಿವನಲ್ಲಿ ಏಕನಿಷ್ಠೆ ಹೊಂದಿದ ಭಕ್ತ, ಮುನಿ. ಆದ್ದರಿಂದಲೇ ಇವನಿಗೆ ಶಿವಸಾಂನಿಧ್ಯ ಪ್ರಾಪ್ತಿ. ಈ ಮುನಿಯ ಶಿವನಿಷ್ಠೆ ಯಾವ ಮಟ್ಟದ್ದೆಂದರೆ ಅವನು ಶಿವನರ್ಧಾಂಗಿಯಾದ ಪಾರ್ವತಿಯನ್ನೂ ಕಡೆಗಣಿಸಿದನಂತೆ! ಪಾರ್ವತಿಯು ಶಿವನಲ್ಲಿ ಒಂದಾಗಿ, ಅವನ ದೇಹದಲ್ಲಿ ಐಕ್ಯಳಾಗಿ ಅರ್ಧನಾರೀಶ್ವರ ರೂಪ ಪಡೆದಾಗಲೂ ಭೃಂಗಿಯ ಅಂಧಾಭಿಮಾನವು ಮರೆಯಾಗದೆ ಅವನು ಭೃಂಗ(ದುಂಬಿ)ದ ರೂಪ ತಾಳಿ ಶಿವನಿಗೆ ಪ್ರದಕ್ಷಿಣೆ ಬರುವಾಗ ಅರ್ಧನಾರೀಶ್ವರ ರೂಪವನ್ನೇ ಮಧ್ಯದಲ್ಲಿ ಕೊರೆದನಂತೆ! ಆದ್ದರಿಂದಲೇ ಇವನಿಗೆ ಭೃಂಗಿಯೆಂಬ ಹೆಸರು. ಆನಂತರದಲ್ಲಿ ಇವನು ತನ್ನ ತಪ್ಪನ್ನು ತಿದ್ದಿಕೊಳ್ಳುವಂತೆ ಶಿವನು ಮಾಡಿದನಂತೆ.

ಶಿವನೊಂದಿಗೆ ನಿಕಟಸಂಬಂಧವಿರುವ ಮತ್ತೊಬ್ಬ ದೇವತೆಯೆಂದರೆ ವೀರಭದ್ರ. ದಕ್ಷನ ಮದದ ಅಹಂಕಾರದ ನಡತೆಯಿಂದ ಕುಪಿತಗೊಂಡ ಶಿವನ ಕೋಪದ ಸಾಕಾರರೂಪವೇ ವೀರಭದ್ರ. ತನ್ನ ಜಟೆಯ ಒಂದು ಕೂದಲಿನಿಂದ ಶಿವನು ವೀರಭದ್ರನನ್ನು ಸೃಷ್ಟಿಸಿದ

ನೆಂಬ ಪ್ರತೀತಿಯಿದೆ. ವೀರಭದ್ರನು ದಕ್ಷಯಜ್ಞವನ್ನು ಸಂಪೂರ್ಣ ಧ್ವಂಸಗೊಳಿಸಿದನಲ್ಲದೆ ಅಲ್ಲಿ ನೆರೆದಿದ್ದ ಎಲ್ಲ ಇತರ ದೇವತೆಗಳ ತೇಜೋವಧೆ ಮಾಡಿದನು. ಇವನಿಗೆ ಮೂರುಕಣ್ಣುಗಳು, ನಾಲ್ಕು ಕೈಗಳು—ಈ ಕೈಗಳಲ್ಲಿ ಬಿಲ್ಲು, ಬಾಣ, ಕತ್ತಿ ಮತ್ತು ಗದೆಗಳನ್ನು ಹಿಡಿದಿದ್ದಾನೆ. ಕಪಾಲಗಳ ಮಾಲೆ ಧರಿಸಿದ್ದಾನೆ. ಮುಖವು ಭಯಂಕರವಾಗಿದೆ. ಭದ್ರಕಾಳಿಯು ಇವನ ಜೊತೆಗಾರ್ತಿ. ಇವಳು ಪಾರ್ವತಿಯಿಂದ ಸೃಷ್ಟಿಯಾದವಳು. ಕೆಲವು ಬಾರಿ ಭದ್ರಕಾಳಿಯನ್ನು ವೀರಭದ್ರನ ಪಕ್ಕದಲ್ಲಿರುವಂತೆ ತೋರಿಸಲಾಗುವುದು. ಶಿವ ದೇವಾಲಯಗಳಲ್ಲಿ ಸಾಮಾನ್ಯವಾಗಿ ಆಗ್ನೇಯ ದಿಕ್ಕಿನಲ್ಲಿ ವೀರಭದ್ರನಿಗೋಸ್ಕರ ಒಂದು ಚಿಕ್ಕ ಗುಡಿಯನ್ನು ನಿರ್ಮಿಸಲಾಗಿರುತ್ತದೆ.

ವೀರಭದ್ರನ ಅನಂತರ ಬರುವ ದೇವತೆ ಚಂಡೇಶ್ವರ. ಇವನು ಮನುಷ್ಯವರ್ಗದ ಮಹಾಭಕ್ತ. ಇವನ ಭಕ್ತಿಗೆ ಮೆಚ್ಚಿದ ಶಿವನು ತನ್ನ ಗಣಗಳ ಮಟ್ಟಕ್ಕೆ ಇವನನ್ನು ಏರಿಸಿದನಂತೆ. ಇವನು ಕೂಡ ವೀರಭಕ್ತ. ತನ್ನ ಕೈಗಳಲ್ಲಿ ವಿನಾಶಕಾರಿಯಾದ ಬಿಲ್ಲು, ಬಾಣ, ತ್ರಿಶೂಲ, ಉಳಿ, ಪಾಶ ಮತ್ತಿತರ ಆಯುಧಗಳನ್ನು ಹಿಡಿದಿರುವನು. ಇವನಿಗೇ ಸಾಮಾನ್ಯವಾಗಿ ಪ್ರತ್ಯೇಕ ಗುಡಿಗಳಿವೆಯಾದರೂ ಇವನನ್ನು ಬಹುತೇಕ ಎಲ್ಲ ಶಿವಾಲಯಗಳಲ್ಲಿಯೂ ಪ್ರತಿಷ್ಠಾಪಿಸಿರುತ್ತಾರೆ. ದಕ್ಷಿಣಾಭಿಮುಖವಾಗಿ ಈಶಾನ್ಯ ಮೂಲೆಯಲ್ಲಿ ಇವನನ್ನು ಸ್ಥಾಪಿಸುವರು. ದೂತನಾಗಿಯೂ, ಮಧ್ಯಸ್ಥಗಾರನಾಗಿಯೂ ಇವನು

ಶಿವನ ಬಳಿ ಭಕ್ತರ ಪರವಾಗಿ ವರ್ತಿಸುವನೆಂದು ನಂಬಲಾಗಿದೆ. ಆದುದರಿಂದ ಶಿವ ದೇವಾಲಯಕ್ಕೆ ಹೋಗುವ ಭಕ್ತರೆಲ್ಲ ಇವನಿಗೆ ಮೊರೆಹೊಗುವುದನ್ನು ಮರೆಯುವುದಿಲ್ಲ.

ಶಿವನ ಇತರ ಅನುಚರರೆಂದರೆ–ಅವನ ಗಣಗಳು. ಇವು ಹೆಚ್ಚಾಗಿ ಪ್ರಮಥ ಗಣವೆಂದು ಅಥವಾ ಭೂತಗಣವೆಂದು ಪ್ರಸಿದ್ಧ ವಾಗಿವೆ. ಇವುಗಳನ್ನು ಒಲಿಸಿಕೊಳ್ಳದಿದ್ದರೆ ಇವು ತೊಂದರೆ ಉಂಟು ಮಾಡುತ್ತವೆ.

### *ಉಪಸಂಹಾರ*

ಶಿವನನ್ನು ಕುರಿತ ಈ ಸಂಕ್ಷಿಪ್ತ ಅಧ್ಯಯನದಿಂದ ಇಷ್ಟನ್ನು ಅರಿಯಬಹುದು: ತ್ರಿಮೂರ್ತಿಗಳ ಪಂಕ್ತಿಯಲ್ಲಿ ಬಂದಾಗ ಶಿವನು ಭಯಂಕರ ಪ್ರಳಯರುದ್ರನಂತೆ ಕಂಡರೂ ಅವನು ನಿಜವಾಗಿ ಮಹಾ ದೇವನಾದ, ದೇವಾಧಿದೇವನಾದ, ಶಿವಸ್ವರೂಪನಾದ, ಮಂಗಳಕರ ನಾದ ಪರಬ್ರಹ್ಮವಸ್ತುವಿನ ಒಂದು ಉಪಾಸ್ಯ ರೂಪ. ಆದರೆ ಉಪಾಸಕರು ತಮ್ಮ ಅಭಿರುಚಿಗೆ ತಕ್ಕಂತೆ ಮತ್ತು ಶಾಸ್ತ್ರಗಳಿಗನುಸಾರ ವಾಗಿ ಆತನ ಯಾವ ರೂಪವನ್ನು ಬೇಕಾದರೂ ಆರಿಸಿಕೊಳ್ಳ ಬಹುದು. ಇಂತಹ ಉಪಾಸನೆಗೆ ಈ ಅಧ್ಯಯನವು ಸಹಕಾರಿ ಯಾದರೆ ಅದೇ ನಮ್ಮ ಶ್ರಮಕ್ಕೆ ಪ್ರತಿಫಲ.

---

